# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 812 (899) |
| ಸದಸ್ಯರ ಹೆಸರು | | ಶ್ರೀ ನಿರಾಣಿ ಹಣಮಂತ ರುದ್ರಪ್ಪ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | 28-09-2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ಬೆಳಗಾವಿ ವಿಭಾಗದಲ್ಲಿನ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿಯಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳೆಷ್ಟು; (ಸಂಸ್ಥೆಯ ಹೆಸರಿನೊಂದಿಗೆ ತಾಲ್ಲೂಕುವಾರು ವಿವರ ನೀಡುವುದು) | ಬೆಳಗಾವಿ ವಿಭಾಗದಲ್ಲಿನ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರಸ್ತುತ 342 ಬೋಧಕ ಮತ್ತು 276 ಬೋಧಕೇತರ ಹುದ್ದೆಗಳು ಖಾಲಿ ಇರುತ್ತವೆ.<br><br>ಸಂಸ್ಥೆಯ ಹೆಸರಿನೊಂದಿಗೆ ತಾಲ್ಲೂಕುವಾರು ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | ಯಾವ ವರ್ಷಗಳಿಂದ ಸದರಿ ಹುದ್ದೆಗಳು ಖಾಲಿ ಇವೆ; | ಸದರಿ ಹುದ್ದೆಗಳು 1983ನೇ ಸಾಲಿನಿಂದ ವಿವಿಧ ದಿನಾಂಕಗಳಿಂದ ನಿವೃತ್ತಿ/ನಿಧನ/ರಾಜೀನಾಮೆ ಇತ್ಯಾದಿ ಕಾರಣಗಳಿಂದ ಖಾಲಿ ಇರುತ್ತವೆ. |
| ಇ) | ಸದರಿ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲು ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು; | ಖಾಸಗಿ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳಲ್ಲಿ ದಿನಾಂಕ:31.12.2015 ರವರೆಗೆ ವಿವಿಧ ಕಾರಣಗಳಿಂದ ತೆರವಾಗಿರುವ ಬೋಧಕರ ಹುದ್ದೆಗಳನ್ನು ಕೆಲವೊಂದು ಷರತ್ತಿಗೊಳಪಟ್ಟು ಭರ್ತಿ ಮಾಡಲು ದಿನಾಂಕ:01.09.2017ರ ಪತ್ರ ಸಂಖ್ಯೆ:ಇಡಿ/240/ಯುಪಿಸಿ/ 2014ರಲ್ಲಿ ಸರ್ಕಾರವು ಸಹಮತಿಸಿದೆ.<br><br>ಅದರಂತೆ ಬೆಳಗಾವಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕರ ಹುದ್ದೆಗಳನ್ನು ಭರ್ತಿ ಮಾಡುವಂತೆ ಕೋರಿ ವಿವಿಧ ಆಡಳಿತ ಮಂಡಳಿಗಳಿಂದ ಪ್ರಸ್ತಾವನೆ ಸ್ವೀಕೃತಗೊಂಡಿರುತ್ತದೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಕಾರ್ಯಭಾರಕ್ಕನುಗುಣವಾಗಿ ಒಟ್ಟು-210 ಬೋಧಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಈಗಾಗಲೇ ಸಂಬಂಧಪಟ್ಟ ಆಡಳಿತ ಮಂಡಳಿಗಳಿಗೆ ಅನುಮತಿ ನೀಡಲಾಗಿದೆ. ಅದರಂತೆ ಒಟ್ಟು-183 ಖಾಲಿ ಹುದ್ದೆಗಳಿಗೆ ಆಡಳಿತ ಮಂಡಳಿಗಳು ಆಯ್ಕೆ ಸಮಿತಿಯ ಮೂಲಕ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ನೇಮಕಾತಿ ಅನುಮೋದನೆಗಾಗಿ ಪ್ರಸ್ತಾವನೆಗಳನ್ನು ಸಲ್ಲಿಸಿರುತ್ತವೆ. ಆಡಳಿತ ಮಂಡಳಿಗಳು ಸಲ್ಲಿಸಿರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ಒಟ್ಟು-157 ಅಭ್ಯರ್ಥಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ. ಉಳಿದ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಪ್ರಸ್ತುತ ಆರ್ಥಿಕ ಇಲಾಖೆಯ ದಿನಾಂಕ:10.06.2020ರ ಸುತ್ತೋಲೆಯನ್ವಯ ಸರ್ಕಾರವು |

| | | |
|---|---|---|
| | | ದಿನಾಂಕ:19.06.2020 ಮತ್ತು ದಿನಾಂಕ:29.07.2020ರ ಪತ್ರಗಳಲ್ಲಿ "ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವಂತಿಲ್ಲ ಹಾಗೂ ಖಾಲಿ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಹೊಸದಾಗಿ ಸಹಮತಿ ನೀಡುವಂತಿಲ್ಲ ಹಾಗೂ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸುವಂತಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಮುಂದಿನ ಆದೇಶದವರೆಗೆ ಈ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದಂತೆ" ನಿರ್ದೇಶಿಸಲಾಗಿದೆ ಹಾಗೂ ಆರ್ಥಿಕ ಇಲಾಖೆಯ ದಿನಾಂಕ:06.07.2020ರ ಸುತ್ತೋಲೆ ಸಂಖ್ಯೆ:ಆಇ/03/ ಬಿಇಎಂ/2020ರಲ್ಲಿ "2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಬ್ಯಾಕ್‌ಲಾಗ್ ಹುದ್ದೆಗಳೂ ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ" ಎಂದು ನಿರ್ದೇಶಿಸಲಾಗಿದೆ. ಆದ್ದರಿಂದ ಬ್ಯಾಕ್‌ಲಾಗ್ ಹುದ್ದೆಗಳೂ ಒಳಗೊಂಡಂತೆ ಯಾವುದೇ ಬೋಧಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತುತ ಅವಕಾಶವಿರುವುದಿಲ್ಲ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/551/ಯುಪಿಸಿ/ 99, ದಿ:07.08.2003 ರಲ್ಲಿ ಹೊರಡಿಸಿರುವ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮ 2003ರ ನಿಯಮ 8(2)ರನ್ವಯ ದಿ:01.03.2001ರಂದು ಖಾಲಿ ಇದ್ದ ಹಾಗೂ ನಂತರ ನಿವೃತ್ತಿ, ನಿಧನ, ರಾಜೀನಾಮೆ ಹಾಗೂ ಇನ್ನಿತರೆ ಕಾರಣಗಳಿಂದ ತೆರವಾಗುವ ಎಲ್ಲಾ ಬೋಧಕೇತರ ಹುದ್ದೆಗಳು ಶಾಶ್ವತ ಅನುದಾನರಹಿತ ಹುದ್ದೆಗಳೆಂದು ಪರಿಗಣಿಸಲ್ಪಟ್ಟಿರುತ್ತದೆ. ಆದ್ದರಿಂದ, ಖಾಸಗಿ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತುತ ಅವಕಾಶವಿರುವುದಿಲ್ಲ. |
| ಈ) | ಯಾವ ಕಾಲಮಿತಿಯಲ್ಲಿ ಈ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲಾಗುವುದು? | ಆರ್ಥಿಕ ಇಲಾಖೆಯ ಆದೇಶವನ್ನು ನಿರೀಕ್ಷಿಸಿದೆ. |

ಇಡಿ 134 ಯುಪಿಸಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

ಅನುಬಂಧ



# ಕರ್ನಾಟಕ ಸರ್ಕಾರ

## ಕಾಲೇಜು ಶಿಕ್ಷಣ ಇಲಾಖೆ

ಬೆಳಗಾವಿ ಜಿಲ್ಲೆಯ ಅಡಿಯಲ್ಲಿ ಬರುವ ಖಾಸಗಿ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ/ಬೋಧಕೇತರ ಹುದ್ದೆಗಳ ಮಾಹಿತಿ (ಸಂಸ್ಥೆ ಮತ್ತು ತಾಲ್ಲೂಕುವಾರು ವಿವರ)

| ಕ್ರ ಸಂ | ತಾಲ್ಲೂಕಿನ ಹೆಸರು | ಸಂಸ್ಥೆಯ ಹೆಸರು | ಕಾಲೇಜಿನ ಹೆಸರು | ಖಾಲಿ ಇರುವ ಬೋಧಕ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಬೋಧಕೇತರ ಹುದ್ದೆಗಳ ಸಂಖ್ಯೆ |
|---|---|---|---|---|---|
| 1 | ಬೆಳಗಾವಿ | ಸನ್ಮತಿ ಶಿಕ್ಷಣ ಸಹಕಾರಿ ಸಮಿತಿ ಲಿ. ಶೇಡಬಾಳ | ಮಹಾವೀರ ಪಿ. ಮಿರ್ಜಿ ವಾಣಿಜ್ಯ ಮಹಾವಿದ್ಯಾಲಯ, ಬೆಳಗಾವಿ | 9 | 11 |
| 2 | ಬೆಳಗಾವಿ | ಅಂಜುಮನ್-ಇ-ಇಸ್ಲಾಂ ಬೆಳಗಾವಿ | ಅಂಜುಮನ್ ಕಲಾ & ವಾಣಿಜ್ಯ ಕಾಲೇಜು ಬೆಳಗಾವಿ | 13 | 8 |
| 3 | ಬೆಳಗಾವಿ | ದಕ್ಷಿಣ ಮಹಾರಾಷ್ಟ್ರ ಶಿಕ್ಷಣ ಮಂಡಳ ಬೆಳಗಾವಿ | ಬಾಹುರಾವ್ ಕಾಕತ್ಕರ ಕಾಲೇಜು ಬೆಳಗಾವಿ | 11 | 14 |
| 4 | ಬೆಳಗಾವಿ | ಮರಾಠಾ ಮಂಡಳದ ಬೆಳಗಾವಿ | ಮರಾಠಾ ಮಂಡಳದ ಕಲಾ, ವಾಣಿಜ್ಯ, ವಿಜ್ಞಾನ ಹಾಗೂ ಗೃಹ ವಿಜ್ಞಾನ ಮಹಾವಿದ್ಯಾಲಯ, ಬೆಳಗಾವಿ | 2 | 1 |
| 5 | ಬೆಳಗಾವಿ | ದಕ್ಷಿಣ ಕೊಂಕಣ ಶಿಕ್ಷಣ ಸಂಸ್ಥೆ ಬೆಳಗಾವಿ | ರಾಣಿ ಪಾರ್ವತಿ ದೇವಿ ಕಲಾ ಮತ್ತು ವಾಣಿಜ್ಯ ಕಾಲೇಜು ಬೆಳಗಾವಿ | 15 | 20 |
| 6 | ಬೆಳಗಾವಿ | ಕೆ.ಎಲ್.ಇ. ಸಂಸ್ಥೆ, ಬೆಳಗಾವಿ | ಲಿಂಗರಾಜ ಕಾಲೇಜು, ಬೆಳಗಾವಿ | 18 | 5 |
| 7 | ಬೆಳಗಾವಿ | ಕೆ.ಎಲ್.ಇ. ಸಂಸ್ಥೆ, ಬೆಳಗಾವಿ | ಆರ್.ಎಲ್.ಎಸ್. ಕಾಲೇಜು, ಬೆಳಗಾವಿ | 15 | 5 |
| 8 | ಬೆಳಗಾವಿ | ಕರ್ನಾಟಕ ಕಾನೂನು ಸಂಸ್ಥೆ ಟಿಳಕವಾಡಿ, ಬೆಳಗಾವಿ 590006 | ಕರ್ನಾಟಕ ಕಾನೂನು ಸಂಸ್ಥೆಯ ಗೋಗಟೆ ವಾಣಿಜ್ಯ ಕಾಲೇಜು ಟಿಳಕವಾಡಿ | 17 | 24 |
| 9 | ಬೆಳಗಾವಿ | ದಕ್ಷಿಣ ಕೊಂಕಣ ಶಿಕ್ಷಣ ಸಂಸ್ಥೆ | ಗೋವಿಂದರಾಮ ಸೆಕ್ಸಾರಿಯಾ ವಿಜ್ಞಾನ ಮಹಾವಿದ್ಯಾಲಯ ಟಿಳಕವಾಡಿ, ಬೆಳಗಾವಿ | 20 | 20 |
| 10 | ಬೈಲಹೊಂಗಲ | ಕಿತ್ತೂರ ರಾಣಿ ಚನ್ನಮ್ಮ ಶಿಕ್ಷಣ ಸಂಸ್ಥೆ ಬೈಲಹೊಂಗಲ | ಕೆಆರ್‌ಸಿಎಸ್ ಜಿಜಿಡಿ ಕಲೆ, ಬಿಎಂಪಿ ವಾಣಿಜ್ಯ ಮತ್ತು ಎಸ್.ವ್ಹಿಎಸ್. ವಿಜ್ಞಾನ ಮಹಾವಿದ್ಯಾಲಯ ಬೈಲಹೊಂಗಲ | 36 | 24 |
| 11 | ಸವದತ್ತಿ | ಕೆ.ಎಲ್.ಇ. ಸಂಸ್ಥೆ, ಬೆಳಗಾವಿ | ಎಸ್.ವ್ಹಿ.ಎಸ್ ಬೆಳ್ಳುಬ್ಬಿ ಕಾಲೇಜು, ಸವದತ್ತಿ | 2 | 0 |
| 12 | ನಿಪ್ಪಾಣಿ | ಕೆ.ಎಲ್.ಇ. ಸಂಸ್ಥೆ, ಬೆಳಗಾವಿ | ಜಿ.ಐ.ಬಿ. ಕಾಲೇಜು, ನಿಪ್ಪಾಣಿ | 13 | 3 |
| 13 | ಮೂಡಲಗಿ | ಮೂಡಲಗಿ ಶಿಕ್ಷಣ ಸಂಸ್ಥೆ ಮೂಡಲಗಿ | ಕಲಾ & ವಾಣಿಜ್ಯ ಮಹಾವಿದ್ಯಾಲಯ ಮೂಡಲಗಿ | 7 | 9 |
| 14 | ಚಿಕ್ಕೋಡಿ | ಕೆ.ಎಲ್.ಇ. ಸಂಸ್ಥೆ, ಬೆಳಗಾವಿ | ಬಿ.ಕೆ. ಕಾಲೇಜು, ಚಿಕ್ಕೋಡಿ | 11 | 1 |
| 15 | ಚಿಕ್ಕೋಡಿ | ಚಿಕ್ಕೋಡಿ ತಾಲ್ಲೂಕಾ ಶಿಕ್ಷಣ ಸಂಸ್ಥೆ ಚಿಕ್ಕೋಡಿ | ಶ್ರೀಮತಿ ಅಹಲ್ಯಾಬಾಯಿ ಅ ಪಾಟೀಲ ಮಹಿಳಾ ಕಾಲೇಜು ಚಿಕ್ಕೋಡಿ | 2 | 6 |
| 16 | ಚಿಕ್ಕೋಡಿ | ಲಕ್ಷ್ಮಿ ಶಿಕ್ಷಣ ಸಂಸ್ಥೆ | ಎಸ್.ಕೆ.ಎಮ್ ಕಾಲೇಜು ಬೇಡ್ಕಿಹಾಳ | 11 | 7 |
| 17 | ಅಥಣಿ | ಕೆ.ಎಲ್.ಇ. ಸಂಸ್ಥೆ, ಬೆಳಗಾವಿ | ಎಸ್.ಎಸ್.ಎಮ್.ಎಸ್. ಕಾಲೇಜು, ಅಥಣಿ | 11 | 2 |
| 18 | ಅಥಣಿ | ಶ್ರೀ ಮಲ್ಲಿಕಾರ್ಜುನ ಆಶ್ರಮ ಟ್ರಸ್ಟ್ ಕಾಗವಾಡ | ಶಿವಾನಂದ ಕಾಲೇಜು ಕಾಗವಾಡ | 12 | 13 |

| ಕ್ರ ಸಂ | ತಾಲ್ಲೂಕಿನ ಹೆಸರು | ಸಂಸ್ಥೆಯ ಹೆಸರು | ಕಾಲೇಜಿನ ಹೆಸರು | ಖಾಲಿ ಇರುವ ಬೋಧಕ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಬೋಧಕೇತ ಹುದ್ದೆಗಳ ಸಂಖ್ಯೆ |
|---|---|---|---|---|---|
| 19 | ರಾಮದುರ್ಗ | ದಿ.ಬೆಳಗಾವಿ ಪೀಪಲ್ಸ್ ಎಜುಕೇಶನ್ ಸೊಸೈಟಿ | ವಿಶ್ವಭಾರತಿ ಪ್ರಥಮ ದರ್ಜೆ ಕಾಲೇಜು ತುರನೂರು | 0 | 0 |
| 20 | ರಾಮದುರ್ಗ | ವಿದ್ಯಾ ಪ್ರಸಾರಕ ಸಮೀತಿ | ಸಿ.ಎಸ್.ಬೆಂಬಳಗಿ ಕಲಾ, ವಿಜ್ಞಾನ & ವಾಣಿಜ್ಯ ಕಾಲೇಜು ರಾಮದುರ್ಗ | 18 | 16 |
| 21 | ರಾಯಬಾಗ | ಶ್ರೀ ವೃಷಭೇಂದ್ರ ಶಿಕ್ಷಣ ಸಂಸ್ಥೆ | ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಹಾರೂಗೇರಿ | 9 | 4 |
| 22 | ರಾಯಬಾಗ | ಶಿಕ್ಷಣ ಪ್ರಸಾರಕ ಮಂಡಳ, ರಾಯಬಾಗ | ಎಸ್. ಪಿ. ಮಂಡಳದ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ರಾಯಬಾಗ | 14 | 12 |
| 23 | ರಾಯಭಾಗ | ಡಾ.ಬಾಬಾಸಾಹೇಬ ಅಂಬೇಡ್ಕರ್ ಶಿಕ್ಷಣ ಸಂಸ್ಥೆ ಕುಡಚಿ | ಬಿ.ಶಂಕರಾನಂದ ಕಾಲೇಜು ಕುಡಚಿ | 0 | 0 |
| 24 | ಹುಕ್ಕೇರಿ | ಶ್ರೀ.ದುರದುಂಡೀಶ್ವರ ವಿದ್ಯಾ ಸವರ್ಧಕ ಸಂಘ, ಸಂಕೇಶ್ವರ | ಎಸ್.ಎಸ್.ಕಲಾ ಹಾಗೂ ಟಿ..ಪಿ. ವಿಜ್ಞಾನ ಮಹಾವಿದ್ಯಾಲಯ ಸಂಕೇಶ್ವರ | 15 | 10 |
| 25 | ಹುಕ್ಕೇರಿ | ಎಸ್.ಡಿ.ವ್ಹಿ.ಎಸ್. ಸಂಘ | ಶ್ರೀ.ಲ.ಕ.ಖೋತ ವಾಣಿಜ್ಯ ಮಹಾವಿದ್ಯಾಲಯ ಸಂಕೇಶ್ವರ | 6 | 8 |
| 26 | ಹುಕ್ಕೇರಿ | ಸಿ.ಎಸ್.ತುಬಚಿ ಶಿಕ್ಷಣ ಸಂಸ್ಥೆ ಹುಕ್ಕೇರಿ | ಸಿ.ಎಸ್.ತುಬಚಿ ಶಿಕ್ಷಣ ಸಂಸ್ಥೆಯ, ಎಸ್.ಎಸ್.ಎನ್. ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯ, ಹುಕ್ಕೇರಿ | 8 | 5 |
| 27 | ಕಿತ್ತೂರು | ಕಿತ್ತೂರ ನಾಡ ವಿದ್ಯಾವರ್ಧಕ ಸಂಘ | ಕೆ.ಎಸ್.ವಿ.ವಿ. ಕಲಾ & ವಾಣಿಜ್ಯ ಕಾಲೇಜು, ಕಿತ್ತೂರು | 13 | 17 |
| 28 | ಖಾನಾಪುರ | ಮರಾಠಾ ಮಂಡಳ ಬೆಳಗಾವಿ | ಮರಾಠಾ ಮಂಡಳ ಕಲಾ ಹಾಗೂ ವಾಣಿಜ್ಯ ಕಾಲೇಜು ಖಾನಾಪುರ | 10 | 3 |
| 30 | ಗೋಕಾಕ್ | ಡಾ.ಬಿ.ಆರ್.ಅಂಬೇಡ್ಕರ್ ಶಿಕ್ಷಣ ಸಂಸ್ಥೆ | ಬಿ.ಶಂಕರಾನಂದ ಕಾಲೇಜು ಘಟಪ್ರಭಾ | 2 | 2 |
| 31 | ಗೋಕಾಕ್ | ಗೋಕಾಕ ಶಿಕ್ಷಣ ಸಂಸ್ಥೆ, ಗೋಕಾಕ | ಜೆ. ಎಸ್. ಎಸ್. ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಗೋಕಾಕ | 22 | 26 |
| ಒಟ್ಟು | | | | 342 | 276 |